## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 630
ಸದಸ್ಯರ ಹೆಸರು : ಶ್ರೀ ಆರ್.ಬಿ. ತಿಮ್ಮಾಪೂರ
ಉತ್ತರಿಸುವ ದಿನಾಂಕ : 17-12-2021
ಉತ್ತರಿಸುವ ಸಚಿವರು : ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಸಮಾಜ ಕಲ್ಯಾಣ ಇಲಾಖೆಯು ಮುಂಬಡ್ತಿ . ವಿಚಾರದಲ್ಲಿ ಸೆಪ್ಟೆಂಬರ್ -2021ರ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ನಿರ್ದೇಶನವನ್ನು ಅನುಷ್ಟಾನಗೊಳಿಸದಿರಲು ಕಾರಣಗಳೇನು; | ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು ದಿನಾಂಕ:06-09-2021 ರಂದು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಸರ್ಕಾರಿ ನೌಕರರಿಗೆ ಮುಂಬಡ್ತಿ ನೀಡುವಲ್ಲಿ ಮೀಸಲಾತಿಯನ್ನು ಪಾಲಿಸುವ ಬಗ್ಗೆ ಆದೇಶ ಹೊರಡಿಸಿದೆ. ಆದರೆ ಹಿಂದಿನ ಆದೇಶಗಳಲ್ಲಿ ಮುಂಬಡ್ತಿಯಲ್ಲಿನ ಮೀಸಲಾತಿಗೆ ಕೆಲವು ನಿರ್ಬಂದಗಳಿದ್ದು, ಅವುಗಳ್ನು ಸರಿಪಡಿಸಲು ಸಮಾಜ ಕಲ್ಯಾಣ ಇಲಾಖೆಯಿಂದ ದಿನಾಂಕ:08-10-2021 ರಂದು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಗೆ ಪತ್ರ ಬರೆದು ಅವುಗಳನ್ನು ಸರಿಪಡಿಸಿ ಸ್ಪಷ್ಟೀಕರಣದೊಂದಿಗೆ ಸರ್ಕಾರಿ ಆದೇಶ ಹೊರಡಿಸಲು ಕೋರಲಾಗಿದೆ. ಅದರಂತೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು ದಿನಾಂಕ :06-11-2021 ರಲ್ಲಿ ಸುತ್ತೋಲೆ ಹೊರಡಿಸಿದೆ. ಅದರಂತೆ ಸುತ್ತೋಲೆ ಸಂಖ್ಯೆ: ಸಿಆಸುಇ 178 ಸೆನೆನಿ 2021, ದಿನಾಂಕ:06-11-2021 ರಂದು ಸ್ವಂತ ಅರ್ಹತೆಯ ಆಧಾರದ ಮೇಲೆ ನೇಮಕಗೊಂಡ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗ ಮತ್ತು ಹಿಂದುಳಿದ ವರ್ಗದ ಅಭ್ಯರ್ಥಿಗಳನ್ನು ಹಾಗೂ ಸ್ವಂತ ಅರ್ಹತೆಯ ಆಧಾರದ ಮೇಲೆ ನೇರ ನೇಮಕಾತಿ ಹೊಂದಿ ನಂತರದ ವೃಂದಕ್ಕೂ ಸ್ವಂತ ಅರ್ಹತೆಯ ಆಧಾರದ ಮೇಲೆ ಮುಂಬಡ್ತಿ ಹೊಂದಿದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ನೌಕರರನ್ನು ಮೀಸಲಾತಿ ಕೋಟಾ ಎದುರು ಪರಿಗಣಿಸುವಂತಿಲ್ಲ ಎಂದು ಎಲ್ಲಾ ಇಲಾಖೆಗಳಿಗೆ ತಿಳಿಸಿರುತ್ತಾರೆ. |
| ಆ) | ಮುಖ್ಯವಾಗಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ ಮತ್ತು ಸಮಾಜ ಕಲ್ಯಾಣ ಇಲಾಖೆ ನಡುವೆ ಮುಂಬಡ್ತಿ ವಿಚಾರದಲ್ಲಿ ಗೊಂದಲಗಳಿರುವುದು ನಿಜವೇ; | ಮೇಲ್ಕಂಡ ಕಂಡಿಕೆ (ಅ) ರಲ್ಲಿ ವಿವರಿಸುವಂತೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಮತ್ತು ಸಮಾಜ ಕಲ್ಯಾಣ ಇಲಾಖೆಯ ನಡುವೆ ಯಾವುದೇ ಗೊಂದಲಗಳಿರುವುದಿಲ್ಲ. ಈಗಾಗಲೇ ಕರ್ನಾಟಕ (ರಾಜ್ಯದ ಸಿವಿಲ್ ಸೇವೆಗಳಲ್ಲಿನ ಹುದ್ದೆಗಳಿಗೆ) ಮೀಸಲಾತಿ ಆಧಾರದ ಮೇಲೆ ಬಡ್ತಿ ಹೊಂದಿರುವ ಸರ್ಕಾರಿ ನೌಕರರಿಗೆ ತತ್ಪರಿಣಾಮವಾದ ಜೇಷ್ಠತೆಯನ್ನು ವಿಸ್ತರಿಸುವ ಅಧಿನಿಯಮ, 2017 ಅನ್ನು ಅನುಷ್ಠಾನಗೊಳಿಸುತ್ತಿರುವುದರಿಂದ ಪ್ರತ್ಯೇಕವಾಗಿ ಇನ್ನೊಂದು ಕಾಯ್ದೆ ಅಗತ್ಯವಿರುವುದಿಲ್ಲ. |
| ಕ | ಇದ್ದಲ್ಲಿ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ನೌಕರರಿಗೆ ಅನುಕೂಲ ಮಾಡಿಕೊಡುವ ದೃಷ್ಟಿಯಿಂದ ಏಕರೂಪತೆ ಕಾಯ್ದುಕೊಳ್ಳಲಾಗುವುದೇ? | |

ಸಕಇ 115 ಎಸ್‌ಟಿಸಿ 2021

(ಕೋಟ ಶ್ರೀನಿವಾಸ ಪೂಜಾರಿ)
ಸಮಾಜ ಕಲ್ಯಾಣ ಮತ್ತು ಹಿಂದುಳಿದ
ವರ್ಗಗಳ ಕಲ್ಯಾಣ ಸಚಿವರು